ಒಂದಾಣೆ ಮಾಲೆ 262

# ಭಕ್ತ ಮಾರ್ಕಂಡೇಯ

## (ಯಕ್ಷಗಾನ ಪ್ರಸಂಗ)



ರಚಯಿತರು:

ಶ್ರೀ। ಅಡೂರು ಬಳಕಿಲ ವಿಷ್ಣಯ್ಯ.



1959

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

[9ನೇ ಪುಟದಿಂದ ಮುಂದುವರಿದುದು]

॥ ಕಂದಪದ್ಯ ॥

ಇನಿತಾನಂದದಿ ಪರಶಿವ । ಮುನಿ ಮಾರ್ಕಾಂಡೇಯನ ಕಳುಹ ಲ್ಕ್ಯಗಂ ವನಿತೆಯರತ್ಯಾನಂದದಿ । ಜಿನುಮಯ್ಯರಂಗೆತ್ತಿದರಾರ್ರತಿ ಯತಿ ಮುದದಿಂ ॥ ೧ ॥

॥ ರಾಗ: ಧವಳಾರ; ಯೇಕ ॥

ವಿಧುಧರನಿಗೆ ಮಧುಸೂಧನಗೆ । ಪದುಮಾಧರಗೆ ಮದನಾಂತಕಗೆ ॥ ತ್ರಿದಶನುತಗೆ ವರ ಬುಧನನು ಪೊರೆದಗೆ । ಮದಗಜಗಮನೆಯರಧಿಕ ವಿಲಾಸದಿ ॥ ವಿಧವಿಧದಾರತಿಯಾ ಬೆಳಗಿದರು ॥ ಶೋಭಾನೆ ॥ ೧ ॥ ಶ್ರೀಲೋಲಗೆ ಕಾಲೀದವಗೆ । ಶೂಲಧರಗೆ ನೀಲಾಂಬರಗೆ । ನೀಲಗಳಗೆ ವನಮಾಲಿಯೆಂದೆನಿಪಗೆ । ಮೂಲೋಕವ ನೆರೆ ಪಾಲಿಸುವವನಿಗೆ ॥ ನೀಲ ದಾರತಿಯಾ ಬೆಳಗಿದರೂ ॥ ಶೋಭಾನೆ ॥ ೨ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ಇಂತೆನುವ. ಸತ್ಯಕಥೆಯನಾಭೂ । ಕಾಂತನಹ ಋತುಪರ್ಣಗತ್ರಿವ. । ಹಂತಮುನಿ ಭಕ್ತಿಯಲಿ ಪೇಳಿದ । ನೆಂತೆನ್ನುವದಾ ॥ ೧ ॥ ಪೃಥ್ವಿ ಸುರ ಸುಬ್ರಾಯನೆಂಬನ ಪುತ್ರನಾಗಿಹ ವಿಷ್ಣು ಹರಿಪದ । ಭಕ್ತಿಯಲಿ ಬರೆದಿರ್ಪೆ ನೀಮಹ । ಸತ್ಯ ಕಥೆಯಾ ॥ ೨ ॥ ಧಾತ್ರಿಯೊಳಸುರುಡೂರೆನುವ ಸು । ಕ್ಷೇತ್ರದೊಳು ರಂಜಿಪ ಮಹೇಶನ ಮಿತ್ರನಹ ನುಹವಿಷ್ಣು ಪಾದದೊ । ಳಿತ್ತೆ ಕೃತಿಯ ॥ ೩ ॥

॥ ಕಂದ ಪದ್ಯ ॥

ಕೃತಿಯಿದರಂ ಗೈದಿಹೆನ್ನು ।
ನ್ನತ ತಪ್ಪಿರಲತಿಶಯವೆಂದೆಣಿಸದೆ ಮಹ ।
ಮತಿಯುತರದರಂ ತಿದ್ದಿದ ।
ರತಿಹಿತ ನ್ಯೆತ್ರಿಗೆ ಭಾಗಿಯಾಗಿಹೆ ನಿರತಂ ॥ ೧ ॥

॥ ಶ್ರೀ ಶುಭಮಸ್ತು ॥

॥ ಶಾರದಾಂಬಾಯೈ ನಮಃ ॥

# ಭಕ್ತ ಮಾರ್ಕಂಡೇಯ

## (ಯಕ್ಷಗಾನ)

\-\-\-\-\-\-\-\-\-

ಪಾತ್ರ ವರ್ಗ:-೧. ಮೃಕಂಡು; ೨. ಮಾರ್ಕಂಡೇಯ; ೩. ಯಮದೇವ, ೪. ಚಿತ್ರ; ೫. ಗುಪ್ತ; ೬. ಯಮದೂತ; ೭. ಯಮದೂತ; ೮. ಮಹಾರುದ್ರ; ೯. ಮೃತ್ಯು; ೧೦. ಮಹಾವಿಷ್ಣು.

॥ ಭಾಮಿನಿ ॥

ಗಿರಿಜೆ ಭಾರತಿ ಲಕ್ಷ್ಮಿ ಗಣಪತಿ । ಹರವಿರಿಂಚಿ ಮುರಾರಿ ಮುಖ್ಯರ । ಚರಣಕಾನತನಾಗಿ ಭಕ್ತಿಯೊಳೊಲಿದು ಪ್ರಾರ್ಥಿಸುತಾ ॥ ಪರಮಮಾಯಾತೀತ ಮಂಗಲ । ಚರಿತೆ ದುರ್ಗಾಂಬಿಕೆಯ ದ್ವಯಪದ । ಸರಸಿಜಕೆ ತಲೆಬಾಗಿ ವರ್ಣಿಪೆನೀ ಮಹಾಚರಿತಾ ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ಮಿತ್ರಕುಲಸಂಜಾತನಾಗಿಹ । ಪೃಥ್ವಿಪತಿ ಋತುಪರ್ಣ ನೃಪನಿಂ । ಗತ್ರಿಮುನಿ ಸತ್ಕಥೆಗಳನ್ನೊರ । ಉತ್ತಲಿರಲು ॥ ೧ ॥ ವರಮಹಾ ಮುನಿತಿಲಕ ಕೇಳ್ಮೆ । ಮೆರೆವ ಮಾರ್ಕಂಡೇಯ ಯೋಗೀ । ಶ್ವರನಿಗಾಯುವ ನಿತ್ತರಾರೈ ವರವ್ರುದೆನಗೆ ॥ ೨ ॥ ಎಂದು ಭಕ್ತಿಯೊಳೆರಗಿದರಸನ । ಕಂಧರವ ಪಿಡಿದೆತ್ತಿ ಕರುಣದೊ । ಳಿಂದುಧರನನು ನೆನೆದು ಸೂರ್ದನು । ಸಂದ ಕಥೆಯೊ ॥ ೩ ॥

॥ ಭಾಮಿನಿ ॥

ಧರೆಯಧಿಪ ಚಿತ್ತೈಸು ಮುಂಗಥೆ । ವರಮೃಕಂಡುಮುನೀಂದ್ರನೆಂಬುಗೆ । ತರಳ ಮಾರ್ಕಾಂಡೇಯನುದಿಸಿದ ಭರ್ಗನೊಲುಮೆಯೊಳು ॥ ಮೆರೆಯೆ ಯೌವನದನಕ ವಟುಗಳ । ಪರವಿಯೊಳಗಿರಲೊಂದಿವಸ ಮುನಿ । ಹರುಷದಿಂ ಕರೆಯಲ್ಕೆ ಬಂದಿಂತೆಂದ ಭಕ್ತಿಯೊಳು ॥ ೧ ॥

॥ ರಾಗ: ಕೇದಾರಗೌಳ; ಅಷ್ಟ ॥

ತಾತ ಚಿತ್ತೈಸೆನ್ನ ಮಾತ ನೀನಿಂದಿನೊ । ಖ್ಯಾತಕೆ ಬಾರೆನುತಾ । ಪ್ರೀತಿಯೊಳ್ ಕರೆದಿಹುದ್ಯಾತರಕಾರ್ಯದೊಳ್ಯಾತು ನಿನ್ನಯು ಸಮ್ಮತಾ ॥ ೧ ॥ ಮಗನೆ ಬಂದೆಯು ಮುದ್ದು ಸುಗುಣ ಮಾರ್ಕಾಂಡೇಯು । ಮೊಗನೋಡ ಲಾಗಿ ನಿನ್ನಾ । ಮೃಗಧರನೆಮ್ಮ ಭಕ್ತಿಗೆ ಮೆಚ್ಚುತಿತ್ತನಿಂದಿಗೆ ಹೀನೆ ಕೀರ್ತಿ ರನ್ನಾ ॥ ೨ ॥ ಮನುಮಥಾರಿಯು ಪಾದವನಜದರ್ಚನೆಯುನ್ನು । ದಿನ ನಿತ್ಯ ಭಕ್ತಿಯೊಳು । ಮುನಿವಂಶದವರಾರಾಧನೆಗೈವದತಿಯೋಗ್ಯ । ಜನುಮಸಾರ್ಥತೆಯೆಂದನು ॥ ೩ ॥ ಹರಗೌರಿಯುರ ದಿವ್ಯ ಚರಣಸೇವೆಗೆ ನೀನು । ಪರಿಪರಿ ಸುಮಗಳನು । ನಿರತ ಸಂಗ್ರಹಿಸಿ ತಂದಿರಿಸಲು ಬೇಕಿದ । ಮರೆಯುಲು ಬಾರದಿನ್ನು ॥ ೪ ॥ ಅಪ್ಪಯ್ಯ ನೀನೆನಗೊಪ್ಪಿಸಿದಾಜ್ಞೆಯು । ತಪ್ಪುವ ಸುತನೆ ನಾನು । ಕಪ್ಪು ಕಂಧರನಡಿಗರ್ಪಿಸೆ ಮನವೆನ । ಗಿಪ್ಪುದು ಸುಮತಹೆನು ॥ ೫ ॥

॥ ಕಂದಪದ್ಯ ॥

ಜನಕನೊಳನುಮತಿಯಂ ಗೊಂ । ಡನುಪಮಗುಣನಿಧಿ ಮಾರ್ಕಾಂ ಡೇಯನು ಬಳಿಕಂ । ವಿನುಗುವ ಪುಷ್ಪಂಗಳ ತರ । ಲೊನದೆಡೆಸೈದಿದನು ಹರುಷದಿ ತಾನಾಗಂ ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿವುಡೆ ॥

ಇತ್ತ ವಿಭವದೊಳೊಂದಿವಸ ರವಿ । ಪುತ್ರನಹ ಯುಮದೇವನೋಲಗ । ವಿತ್ತು ಸಚಿವರೊಳೆಂದನತಿ ಮುದ । ವೆತ್ತಿ ಮನದಿ ॥ ೧ ॥ ಚಿತ್ರಗುಪ್ತರೆ ಕೇಳಿರಿಂದು ಧ । ರಿತ್ರಿಯೊಳಗ್ಯಾರಿಹರು ಶೈವಿನಿ । ಪತ್ತನದ ಸೌಭಾಗ್ಯ ನೋಡಲು । ಕತ್ತು ಬಹರು ॥ ೨ ॥ ಮಾನವರೊಳುದ್ಭವಿಸಿ ಮೆರದಿಹ । ಹೀನ ಪಾಪಿಗಳ್ಯಾರು ಮರ್ತ್ಯದಿ । ಕಾಣಬಂದುದೆ ನಿಮ್ಮಣಿಕೆಗಿಂ । ದೇನು ಹೇಳಿ ॥ ೩ ॥ ಪರಿಕಿಪಲು ದುರಿತಾತ್ಮರೀ ಮಹ । ನರಕಮಧ್ಯದಿ ಶೂನ್ಯ ರೈಸಲೆ । ನರ ನೆರವಿ ಪುಣ್ಯಾತ್ಮರಾದರೆ । ಧರಣಿಯೊಳಗೆ ॥ ೪ ॥

॥ ರಾಗ: ಕಾಂಬೋದಿ, ಚಂಪೆ ॥

ಚಿತ್ತವಿಸು ಯುಮದೇವ । ಪೃಥ್ವಿಯೊಳು ಜನಿಸಿರುವ ವ್ಯಕ್ತಿ ಮಾರ್ಕಾಂಡೇಯುನೆನುವಾ । ಖ್ಯಾತ್ಯಜನಿದೇದಿನದಿ । ಮೃತ್ಯುಕಾರಣದವಧೆ ।

ಚಿತ್ರಿಸಿಹುದರಿತಿಹೆನು ಮನದೀ ॥ ೧ ॥ ಧಾರುಣೀಸುರನವನೆ ಘೋರ ದುರಿತಾತ್ಮಕನೆ। ಯೇರಿಕೊಂಡಿಹ ಪ್ರಾಯದವನೆ॥ ಚಾರು ಪುಣ್ಯಾತ್ಮಕನೆ। ಪಾರಮಾರ್ಥಿಕನಹೆನೆ। ವಾರತೆಯುನರುಹಿರೆನ್ನೊಡನೆ ॥ ೨ ॥ ಹದಿನಾರು ವತ್ಸರದಿ। ಮುದದೊಳಿಹ ಸುಂದರದಿ। ಸದಮಲಾತ್ಮಕನು ಯುವ್ವನದಿ। ವಿಧಿಯು ಬರದಿರುವವಧಿ। ತುದಿಯು ಇಂದಿನ ದಿನದಿ। ಬದಲು ಮಾತಿಲ್ಲ ಹೊಸ ವರದಿ ॥ ೩ ॥ ಆತನಾವೆಡೆಯಿಹನು। ಭೂತಳಾಮರನನ್ನು। ಭೀತಿಯಿಲ್ಲದೆ ತರುವದಿನ್ನು ॥ ಈತತೂರಣ ಪೋಗಿ। ಪಾತಕಿಯ ಬಳಿಗಾಗಿ। ಮಾತಿತ್ತೆ ನಿಮಗೆ ಲೇಸಾಗಿ ॥ ೪ ॥

॥ ಭಾಮಿನಿ ।

ದಂಡಧರನಾಜ್ಞೆಯಲಿ ಯಮಭಟ। ರಂಡಲೆದು ಬಲುಬೇಗದಲಿ ಭೂ। ಮಂಡಲದಿ ರಂಜಿಪ ಮೃಕಂಡ ವಿನಾಶ್ರಮಕೆ ಬರಲು। ಖಂಡ ಪರಶುವನರ್ಚಿಸಲು ಸುಮ। ಪಿಂಡಕೆ ಯ್ಯುತಲಿಪ್ಪ ಮುನಿಮಾ। ರ್ಕಾಂಡ ತೇಜನ ಕಂಡು ಯಮಭಟರೊತ್ತಿದರು ಕನಲಿ ॥ ೧ ॥

॥ ರಾಗ: ಭೈರವಿ; ಯೇಕತಾಳ ॥

ನಿಲ್ಲೆಲೊ ಮಾರ್ಕಂಡೇಯ। ಮುಂ। ದೆಲ್ಲಿಗೆ ನೀಸ್ಯೈದುವೆಯಾ। ಬಲ್ಲಿದನೆಂದಿಹ ಶೌರ್ಯ। ಇಂದಿಲ್ಲಿಗೆ ಕೊನೆ ತಿಳಿದಿಹೆಯಾ ॥ ೧ ॥

॥ ರಾಗ: ಕೇತಾರಗೌಳ; ಅಷ್ಟ ॥

ಆರು ನೀವೆನ್ನನೀರೀತಿಯೊಳು ಬಂದು। ಗಾರುಡಿಸುತಿಹುದು। ಭೂರಿವಿಕ್ರಮರೆಂದು ತೋರುವಿರ್ಯೈಸಲೆ। ಯೇರಿದ ಹಗೆಯೇನಿದು ॥ ೧ ॥

॥ ರಾಗ: ಭೈರವಿ; ಯೇಕ ॥

ಖಗಸುತ ವೈವಸ್ವತನಾ। ಭಟರುಗಳೈಸಲೆ ನಾವ್ ನಿನ್ನಾ। ಮುಗಿಸಲು ಬಂದೆವು ಜತನ। ಬಲು। ಹಗೆಯಿದೆ ಪೊರಡೈ ಮುನ್ನಾ ॥ ೧ ॥

॥ ರಾಗ: ಕೇತಾರಗೌಳ; ಅಷ್ಟ ॥

ಧಾರುಣಿಯೊಳು ಕೆಟ್ಟ ಘೋರಕೃತ್ಯವಗೈದ। ಕ್ರೂರ ಪಾಪಿಯು ನಾನಲ್ಲ। ಗೌರಿವಲ್ಲಭನ ಪಾದಾರವಿಂದಕೆ ಸುಮ। ವೇರಿಸೆ ಬಂದೆನಲ್ಲಾ ॥ ೧ ॥

॥ ರಾಗ: ಭೈರವಿ; ಯೇಕ ॥

ವಿಧಿವಿಧಿಸಿದ ಕಡೆಯುವಧಿ । ನಿನ । ಗೊದಗಿರೆ ಬಾಳ್ವೆಯು ಜಗದಿ । ವಧಿಸದೆ ಬಿಡೆವೀಕ್ಷಣದಿ । ಮುಂ । ಗಿದರಿಹುದೇ ಫಲ ಮನದಿ ॥ ೧ ॥

॥ ಭಾಮಿನಿ ॥

ಮುಳಿದು ಯಮಭಟರಾಗ ಮುನಿಕುಲ । ತಿಲಕ ಮಾರ್ಕಾಂಡೇಯು ನುನ್ನತ । ಗಳಕೆ ಪಾಶವನಿಕ್ಕಿ ಬಂಧಿಸುತೊಡನೆ ಘರ್ಜಿಸುತಾ ॥ ಇಳೆಯೊಳುರುಳಿಸುತೆಳೆಯೆ ಬಲುಭಯು । ಗೊಳುತ ಮನ್ಮನ ಮರುಗುತಲಿಸಿತಿ । ಗಳನೆ ಹಾಯೆಂದೆನುತ ನುತಿಸಿದ ಶಿವನ ಘೋಳಿಡುತಾ ॥ ೧ ॥

॥ ರಾಗ: ನೀಲಾಂಬರಿ; ರೂಪಕ ॥

ಶಿವಶಂಕರ ಗೌರೀವರ । ಭವಹರ ಭಯಸಂಹರ । ಭುವನದಿ ನಿಜಭಕ್ತರ । ಶಿವಹಕವೃತ ಸಾರಾ ॥ ರವಿಪುತ್ರನ ಭಟರಿಂದಲಿ । ಭವಣೆಯೊಳಹೆನಿಂದಿಲಿ । ತವಕದೊಳೆಳೆಯುತ್ತಲಿ । ಕವಿವರಿದೇನೆನಲಿ ॥ ೧ ॥

॥ ರಾಗ: ಕೇದಾರಗೌಳ; ಝಂಪೆ ॥

ಎಲ್ಲಿ ನಿನ್ನನ್ನು ಸಲಹಲು । ಬಹ ಗೌರಿ । ವಲ್ಲಭನ ತೋರೀಗಲು । ನಿಲ್ಲದಾತನ ಸಹಿತಲೀ । ಯಮಲೋಕ । ದಲ್ಲಿರಿಸದಿಹೆವಿಂದಿಲಿ ॥ ೧ ॥

॥ ರಾಗ: ನೀಲಾಂಬರಿ; ರೂಪಕ ॥

ನಿನ್ನಯ ಪದ ಭಜಕನ । ಮನ್ನಿವರೆಳದೊಯ್ವರು ನಾ । ನುನ್ನತ ದುರಿತಾತ್ಮನೆಯುನ । ಗಿನ್ನಿಲ್ಲದೆ ಸದನಾ ॥ ಸನ್ನುತ ಪನ್ನಗಭೂಷಣ । ಮನ್ನಿಸಿ ಪೊರೆಯುನುದಿನ । ಬನ್ನಬಡಿಸದಿರು ಗುಣ । ರನ್ನ ಉಮಾರಮಣಾ ॥ ೧ ॥

॥ ರಾಗ: ಕೇದಾರಗೌಳ; ಝಂಪೆ ॥

ಬಡ ವಿಪ್ರ ನಿನ್ನನೀಗಾ । ಯಮರಾಜ । ನೆಡೆಯೊಳಿರಿಸುವೆವು ಬೇಗಾ । ನಡೆಯೊ ಬೊಬ್ಬಿಡದಿರೀಗಾ । ಪಾಪಿಯೆಂ । ದೆಡೆಬಿಡದೆಯೆಳದರಾಗ ॥ ೧ ॥

॥ ರಾಗ: ಭೈರವಿ; ಝಂಪೆ ॥

ಬಿಡಿರೆನ್ನ ಪಾಶದಲಿ । ಪಿಡಿದೆಳೆಯುದಿಂದಿನಲಿ । ನಡುಗುತಿದೆ ಚಿತ್ತದಲಿ । ನುಡಿವೆ ಪ್ರೀತಿಯುಲಿ ॥ ೧ ॥ ತಂದೆತಾಯಿಗಳಿಲ್ಲಾ । ಬಂಧುಬಳಗವೆ

ಳಿಲ್ಲ । ಬಂದುದೋರ್ವನೆಯಲ್ಲ । ಸಂದೇಹವಿಲ್ಲಾ ॥ ೨ ॥ ಹರನ ಪದ
ಕರ್ಪಿಸಲು । ಭಂತ ಸುಮವಪ್ಪಿಸಲು । ಚರಿಸುವೆನು ವಿಪಿನದೊಳು ।
ಕರುಣವಿಡಿರೆನಲು ॥ ೩ ॥

॥ ಭಾಮಿನಿ ॥

ಅಳುತಳುತ ಗೋಳಿಡುತ ಮುನಿಕುಲ । ತಿಲಕನಿಳೆಯೊಳು ಮಲಗು
ತೇಳುತ । ಹಳುವದೊಳು ಯಮಭಟರ ಪಾಶದಿ ಸಿಲುಕಿ ಬೊಬ್ಬಿಡುತಾ ॥
ಇಳೆಯೊಳಿಂತೆನಗೊದಗಿತೆನ ಕಂ । ಗಳಿಗೆ ಶಿವಗುಡಿಯೊಂದು ಕಾಣಿಸೆ ।
ವಳಪೊಗುತ ಬಿಗಿಪಿಡಿದ ಲಿಂಗವ ಶಿವನೆ ಸಲಹೆನುತಾ ॥ ೧ ॥

॥ ರಾಗ: ಯೇಕ ॥

ದೇವ ನಿನ್ನ ನಾಮಾವಳಿಯಮೃತವ । ಸೇವಿಸುತಿಹೆ ಮಹದೇವ
ಸದಾಶಿವ ॥ ಭಾವಜ ರಿಪುಭ । ಕ್ತಾವಳಿನಿಚಯವ । ಪಾವನಗೊಳಿಸುವೆ
ಜೀವವುಳಿಸು ಶಿವ ॥ ದೇವ ನಿನ್ನ ॥ ೧ ॥

॥ ರಾಗ: ಮಾರವಿ; ಯೇಕ ॥

ಪೊಡವಿಯಮರ ನೀ ಬಿಡು ಶಿವಲಿಂಗವ । ಪಿಡಿದಿಹುದೇಕಿಂತು ॥
ಸುಡುಗಾಡಿನೊಳಿಹ ಮೃಡನೈತರುವನೆ । ಬಿಡಿಸಲು ಬಿಡು ಭ್ರಾಂತು ॥ ೧ ॥
ಯಮನನು ಮತಿಯಿಂದೆಮಗಿಹುದೆಲೆ ಸಂ । ಯಮಿಸುತ ನೋಡಿ ನ್ನಾ ।
ನಿಮಿಷವು ಬಿಡೆನೆಂದುಮೆಯರಸನ ಸಹ । ಕ್ರಮದೊಳೆಳದರವನಾ ॥ ೨ ॥

॥ ವಾರ್ಧಿಕ್ಯ ॥

ಪ್ರಳಯೊದಳ್ ಸಕಲ ಭೂತಳವ ಲಯಮೆಸಗೆ ಶಿವ । ತಳೆಯುವಂ
ತೂಗ್ರಮಹ ಕಲೆಗಳಂನಳವಟ್ಟು । ಮುಳಿದು ಶಿವಲಿಂಗದಿಂ ಬೆಳೆದು ಮೈ
ದೋರಿದಂ ತಿಳುಹಲೇನದ್ಭುತವನೂ ॥ ಇಳೆಯ ಮರನಂನೊಯ್ಯಲೆಳವು
ತಿಹ ಭಟರು ಮೆ । ಗ್ಗಳ ರುದ್ರಮೂರ್ತಿಯಂ ತಿಳಿದಾಗ ಭೀತಿಯಂ । ತಳೆದು
ಪಾಶವ ಬಿಟ್ಟು ನಿಲದೋಡಿ ಯಮಗೆನಲು ತಿಳಿದನುಜೆಯಂ ಕರದನು ॥ ೧ ॥

॥ ರಾಗ: ಸೌರಾಷ್ಟ್ರ; ತ್ರಿಪುಡೆ ॥

ಎತ್ತಲಿಹೆ ಯೆಲೆ ಮೃತ್ಯುಸೋದರಿ । ಮತ ಕಾಶಿನಿ ಇತ್ತ ಬಾರೆಲೆ ।
ಚಿತ್ರವಾಯಿತ್ತೀ ಹೊತ್ತಿನಲಿ ಹೊಸ । ವಾರ್ತೆಯೊಂದು ॥ ೧ ॥ ಯೋಗಿ

ಮಾರ್ಕಂಡೇಯನೆಂಬನ | ಸಾಗಿಸಲು ನಮ್ಮವರು ತಿರಳುತ | ಭೋಗಿ ಭೂಷಣಗಂಜಿದರು ಚಿರ | ಗಾಗಿ ಮನದಿ ॥ ೨ ॥ ಭಳಿರೆ ಚೋದ್ಯವಿದಗ್ರ ಜನೆ ಭೂ | ತಳದೊಳಹ ಪ್ರಾಣಿಗಳ ತಂಡವ | ನೆಳತರಲು ಹರನೇಕೆ ತಡ ದಿಹ | ತಿಳುಹುಯೆನಗೆ ॥ ೩ ॥ ಪಾಶವನು ಬಂಧಿಸುತಲೆಳೆಯೆ ಮ | ಹೇಶ ಲಿಂಗದೊಳುದಿಸಲೀಕ್ಷಿಸಿ | ರೋಷಕಂಜುತ ಬಂದರೈಸಲೆ ಹೇಸಿಕೆ ಯಿದೂ ॥ ೪ ॥ ಈಶನಾಗಲಿ ಜಿದರುವೆನೆ ವಾ | ಣೀಶ ತಾನೈತರಲಿ ಮಿಗೆ ಲ | ಕ್ಷ್ಮೀಶನಡ್ಡೈಸಿದರು ನಿಮಿಷದಿ | ಘಾಷಿಸುವೆನು ॥ ೫ ॥ ಅಂದ ರೆಲೆ ಕೇಳ್ ಭಗಿನಿಯೆಳೆ ನೀ | ಮುಂದುವರಿದು ಮೃಕಂಡು ಸುತನನು | ತಂದುಕೊಡು ಬೇಗೆನುತಲಾಜ್ಞೆಯ | ಹೊಂದಿಸಿದನೂ ॥ ೬ ॥

॥ ಕಂದಪದ್ಯ ॥

ಇಂತಂಣನೊಳನುಮತಿಯಂ | ತಾಂ ತಳೆಯುತ ನಡೆತಂದತ್ಯಾಗ್ರ ದೊಳಂ | ಕಂತುವಿರೋಧಿಯ ಪೂಜಿಸು | ತಿಂತೆಂದಳು ಮೃತ್ಯು ವಿರೋಧ ದೊಳಾಗಂ ॥ ೧ ॥

॥ ರಾಗ: ಭೈರವಿ; ಮಟ್ಟೆ ॥

ಈಶನಹೆಯೊ ನೀನು ವರ ಮು | ನೀಶನನ್ನು ಸಲಹುವಾತ | ಪಾಶ ವಿಕ್ಕಿದವರ ಮಾನ | ದೂಷಿಸಿದೆಯಾ ॥ ೧ ॥ ಘೋರರೂಪೆಯಾಗಿ ತೋರ್ಪೆ | ಯಾರೆ ನೀನು ಪೆಸರದೆಂತು | ಭೂರಿ ಬೇಗ ಬಂದುದೇನು | ಕಾರಣಂಗಳೂ ॥ ೨ ॥ ಮೃತರ ಜೀವದೊಡೆಯ ಪ್ರೇತ | ಪತಿಯ ಭಗಿನಿ ಮೃತ್ಯುವೈಸೆ | ಯತಿಯನೊಯ್ಯಲಾಗಿ ಬಂದೆ | ಹಿತದಿ ಬಿಡುವೆಯಾ ॥ ೩ ॥ ಸಾವ ಮೊದಲೆ ಪಾಶವಿಕ್ಕಿ | ಜೀವವೆಳವುದುಂಟೆ ಎನ್ನ | ಭಾವಿಸುತ್ತ ಪಿಡಿದ ಭಕ್ತ | ಕಾವೆನೀತನಾ ॥ ೪ ॥ ಪೂರ್ವನೆಲೆಯ ಮರೆತು ನೀನು | ಪಾರ್ವ ನನ್ನು ಬಿಡದಿರಲ್ಕೆ | ಈರ್ವರನ್ನು ಸೆಳೆವೆ ಗರ್ವ | ತೋರ್ವದೇಕೆಲಾ ॥ ೫ ॥ ಮರೆಯ ಹೊಕ್ಕ ಶರಣನನ್ನು | ಪೊರವದೆನ್ನ ಬಿರುದು ಕಂಡ | ತೆರನ ಮಾಡೆನಲ್ಕೆ ಮೃತ್ಯು | ಉರಿಯನುಗುಳುತಾ ॥ ೬ ॥

॥ ಭಾಮಿನಿ ॥

ಕೃತ್ತಿವಾಸನ ನೆಲೆಯನರಿಯದೆ | ಮತ್ತಜನ ಕಂದರಕೆ ಪಾಶವ | ಸುತ್ತಿ ಖತಿಯಿಂದೆಳದಳಾಕ್ಷಣವೇನನುಸುರುವೆನು ॥ ಭಕ್ತವತ್ಸಲ ಸಲ

ಹೆನಲು ಮುನಿ । ಹತ್ತಿತತಿ ರೋಷಾಗ್ನಿ ಶಿವನಿಗೆ । ಯೆತ್ತಿ ಶೂಲದಿ ತಿವಿದು ಮೃತ್ಯುವ ಧರೆಗೆ ಕೆಡಹಿದನು ॥ ೧ ॥

॥ ರಾಗ: ಭೈರವಿ; ಝಂಪೆ ॥

ಭಕ್ತ ಮಾರ್ಕಂಡೇಯು । ಯಿತ್ತ ಬಾರೆನ್ನಯ್ಯ । ಎತ್ತಿಕೊಂಬೆನು ಧೈರ್ಯ । ಚಿತ್ರನಾಗಯ್ಯ ॥ ೧ ॥ ಪಾಶದೊಳು ಬಂಧನದಿ । ಘಾಸಿಗೈವರೆ ಭರದಿ । ಬೇಸರಿಸದಿರು ಮನದಿ । ಪೋಷಿಸುವೆ ದಯದಿ ॥ ೨ ॥ ಪರಮ ಪುರುಷನೆ ನಿನ್ನ । ನಿರತ ಭಜಿಸುವ ಸುಜನ । ನೆರವಿಗಿಹುದೇ ಮರಣ । ವರ ಗೌರಿರಮಣ ॥ ೩ ॥

॥ ಕಂದಪದ್ಯ ॥

ಇನಿತಾದುದನಂ ತಿಳಿಯುತ । ದಿನಮಣಿ ಸಂಭವ ಕುಪಿತೋದ್ರೇಕದೊಳಂ । ಮನುಮಥವೈರಿಯುಗ್ಗೈದಂದ । ನೆಣಿಸುತಲಿಂತೆಂದನು ತಾ ಘನವೈರದೊಳಂ ॥ ೧ ॥

॥ ರಾಗ: ಭೈರವಿ; ಏಕ ॥

ನರಕಾಧಿಪನೆಂದೆನುತಾ । ಬಲು । ಬಿಂದಿಹುದೆನಗನವರತಾ । ಕೊರತೆಯುನಿಂದೆಸಗುತ್ತಾ । ಈ । ತೆರಗೈದನೆ ಶಿವ ವ್ಯರ್ಥಾ ॥ ೧ ॥ ದಿಗಧಿಪರೊಳು ಬಲ್ಲಿದನೂ । ಯಮ । ನಗರದ ಧೊರೆಯಾಗಿಹೆನೂ ! ಮೊಗದೋರುವೆನೆಂತಿನ್ನೂ । ತ್ರೈ । ಜಗದೊಳು ಪೇಳಲದೇನು ॥ ೨ ॥ ಜಗದೀಶನ ತಿಳಿದಿಹೆನ । ಹಗೆಯಿಂದೊದಗಿಹುದೇನು । ಭಗಿನಿಯು ಸಂಹರಿಸಿದನು । ಗ । ರ್ವಗಳೇರಿತೆ ಯಮಗಿನ್ನು ॥ ೩ ॥ ಬಿಡೆ ಮಾರ್ಕಾಂಡೇಯನನು । ಶಿವ ! ನೆಡೆಯೊಳು ಹೊಂದಿರಲೇನು । ಪಿಡಿಯುತಲೀ ಗೆಳತಹೆನು । ಎಂ । ದೊಡನೈದಿದನಾ ಯಮನು ॥ ೪ ॥

॥ ರಾಗ: ಸೌರಾಷ್ಟ್ರ; ತ್ರಿಪುಡೆ ॥

ಭಳಿರೆಲವೊ ಮಹದೇವ ನಿನ್ನಯು । ಬಳಿಗೆ ಬಂದ ಸಹೋದರಿಯುನೀ । ನಿಳೆಗೆ ಕೆಡಹಿದರಿಂದ ಕೀರ್ತಿಯು ತಿಲಕವ್ಯಾಕೆ ॥ ೧ ॥ ಮೃತ್ಯುವಿಂಗಪಮೃತ್ಯು ಯೋಗನ । ನೊತ್ತಿಹನು ವಿಧಿಯೆನ್ನೊಳಿಂದಿಗೆ । ಯಿತ್ತ

ಕಳುಹಿದುದೇಕೆಯುವಳನು । ವಾರ್ತೆಯರುಹು ॥ ೨ ॥ ಭೂತಪತಿ ನೀನಾಗಿ ಯೆನ್ನನು । ಪ್ರೇತಪಾಲಕನೆನಿಸೆ ವಿಪ್ರನ । ಘಾತಿಸುತ್ತೆಳತರಲಿ ಕಟ್ಟಿದೆ । ನೋತು ಯಿಂವಳಾ ॥ ೩ ॥ ಪ್ರಾಣದಧಿಕಾರವೆ ಹೊರತು ಹುಲು । ಕೋಣವಾಹನ ನಿನಗೆ ಕೊಲ್ಲುವ । ತ್ರಾಣವೆಲ್ಲಿದೆ ತಪ್ಪಿನಡವೆಯು । ಹೀನ ಮತಿಯೆ ॥ ೪ ॥ ಜೀವವೆಳೆಯುತ್ತಿರಲು ವಿಪ್ರನ । ಸಾವಳಿಗೆ ಮರುಳಾಗಿ ಹರನೀ । ನೀವಿಧದಿ ಬಿಡದಿಹುದು ನೀತಿಯು । ಭಾವವಹುದೇ ॥ ೫ ॥

॥ ಭಾಮಿನಿ ॥

ಸೃಷ್ಟಿಸ್ಥಿತಿಲಯವೆನುವ ತ್ರಿವಿಧ । ಕಟ್ಟಳೆಯನನುಸರಿಸಿ ಜಗದಲಿ । ಹುಟ್ಟುಮರಣಗಳೆಂಬುದಿದು ನೆಲೆ ಮನುಜರನ್ವಯದಿ ॥ ಕೆಟ್ಟ ಪಾಪಿಗಳಳಿದವೋಲೆಳ । ದಿಟ್ಟ ಜೀವಾತ್ಮನನು ನಿನ್ನಯ । ಪಟ್ಟಣದಿ ಬಾಳುವದೆ ನಿನಗಿಹ ಕೀರ್ತಿ ಸುಸ್ಥಿರದಿ ॥ ೧ ॥

॥ ರಾಗ: ಭೈರವಿ; ಯೇಕ ॥

ಮರ್ತ್ಯದೊಳಿಹ ಮಾನುಷರಾ । ನೆಳ । ದಿತ್ತಪೆ ನರಕದೊಳಿದರಾ । ಯಿತ್ಯರ್ಥಿಸುವಧಿಕಾರ । ನಿನ । ಗಿತ್ತವರ್ಯಾರು ವಿಚಾರ ॥ ೧ ॥ ಹರಿಹರ ಸುರಪಾದಿಗಳಾ । ಪುರ । ಸ್ಥಿರವೈಸಲೆ ಸಾಧುಗಳಾ । ನೆರವಿಗೆನು ರೀತಿಗಳಾ । ನೀ । ನರಿಯೆಯು ಶೈಮನಿಪಾಲ ॥ ೨ ॥ ತಿಳಿದೆಳೆವರೆ ಪ್ರಾಣಿಗಳಾ । ಸಂ । ಕುಲ ಬಿಡದಿಹರೇ ಬಹಳಾ । ಅಳಿದವರಿಂತ್ಯೈದಿದರೆ । ಎನಗುಳಿದವರಾರೈ ಬಹರೆ ॥ ೩ ॥ ದುರಿತಾತ್ಮರ ನೆರವಿಯನು । ನೀ । ನರಿತ್ಯೋವದೆ ಹೊರತಿನ್ನು । ನೆರೆ ಮಹ ಪುಣ್ಯಾತ್ಮರನು । ಸಂ । ಹರಿಸದೆ ತಿಳಿದಿರು ನೀನು ॥ ೪ ॥ ದುರಿತ ಸುಕೃತರೆಂದೆನುವಾ । ನಿರ್ಧರ ಕೇಳಲು ನಿನ್ನೊಳವಾ । ತೆರಳಿದುದಲ್ಲಿದು ಬೇಗಾ । ಬಿಡು । ಸೆರೆಯನು ವಿಪ್ರನನೀಗಾ ॥ ೫ ॥

॥ ಭಾಮಿನಿ ॥

ಅಂತಕನು ನೀನಾಡೊಡೆಯು ತ್ರಿಪು । ರಾಂತಕನು ತಾನಹೆನುನೆಂಬುತ । ಚಿಂತಿಸುವ ವಿಪ್ರನನು ಬಿಡುವವನಲ್ಲ ನಡೆಯೆನಲು । ಕಂತುವೈರಿಯು ಸಹಿತ ಪಾಶದಿ । ಮುಂತೆಳೆಯಲರಿತಧಿಕ ರೋಷವ । ನಾಂತು ತೂಲದಿ ಶಿವಿಯಲಿನಸುತ ಕೆಡದನವನಿಯೊಳು ॥ ೧ ॥

॥ ವಾರ್ಧಿಕ್ಯ ॥

ಹರನುಗ್ರಪ್ರಸಂಸರಿತು ಸುರಪಮುಖ್ಯಾಮರರು । ಸರಸಿಜೋದ್ಭವ ಗೆನಲ್ಕಿರದವರನೊಡಗೊಂಡು । ಬರುತ ಶ್ರೀಹರಿಗೊರೆಯಲರಿತೆಲ್ಲರೊಂ ದಾಗಿ । ತೆರಳಿದರು ಶಿವನ ಬಳಿಗೆ ॥ ಕರವಮುಗಿದೆಲ್ಲವರ್ ಮರುಗುತಿರ ಲೀಕ್ಷಿಸುತ । ನೆರೆ ಶಾಂತಮನಸಾಗಿ ಮೆರದು ಮನ್ನಿಸಲಾಗ । ಸರಸಿ ಜಾಕ್ಷಂ ಮಗುಳೆ ಪರಮೇಶನೊಡನೆಂದ ನೆರೆಯಲಿಹ ಕಾರ್ಯದೊಳಗೆ ॥೧॥

॥ ರಾಗ: ಸುರಟಿ; ಯೇಕ ॥

ಯೋಚಿಸಿದೇನಿದು ಶಿವನೆ । ಚೋದ್ಯವಿ । ದೇನು ಉಮಾವರನೆ । ಭಾನುಕುಮಾರನ ಹಾನಿಯುಗೈದಿಯು । ಕಾಣಲು ಮಂದಪಮಾನವಿ ದಾಯ್ತೆನೆ ॥ ಯೋ ॥ ೧ ॥ ಶ್ರೀಲಲನಾವರನೆ । ರವಿಸುತ । ಪೇಳಿದ ಗರ್ವವಸೆ । ತಾಳಿದೆ ಖತಿ ನಿರ್ಮೂಲವ ಮಾಡಿದೆ । ಕಾಲನಿವನ ನೀ ಪೇಳುವ ದೇನೈ ॥ ಶ್ರೀ ॥ ೨ ॥ ವ್ರತಿಗೈದಿಹ ಯಮುನಾ । ಎಬ್ಬಿಸಿ । ಕ್ಷಿತಿಯು ಸಲಹು ಮುನ್ನಾ । ಮತಿಯುತ ನೀನೈ ಸ್ಥಿತಿಯೊನಗಹುದೈ । ಅತಿಹಿತ ನಡಸೈ ಸಿತಗಳನೆ ॥ ನೀನೆಯೋ ॥ ೩ ॥

॥ ಭಾಮಿನಿ ॥

ಹರ ನಿರೂಪಿಸಲರಿತು ಪರಶಿವ । ಪರಮ ಕರುಣದೊಳಮೃತ ಹಸ್ತದಿ । ತರಣಿನಂದನ ಮೃತ್ಯುವನು ಸಹಿತೊಡನೆ ಪಡಮಂಸೆ ॥ ಭರ ದೊಳೆದ್ದ ಖಿನಮಿಸುತ ಭವಗೆ । ಮುರಹರಗೆ ಸಹಿತೆರಗಿ ಕಾಲನು । ಪುರಕೆ ಸೋದರಿಯೊಡನೈತೆರಳಿದನಧಿಕ ಹರುಷದಲಿ ॥ ೧ ॥

॥ ರಾಗ: ಕಾವೇರಿ; ಯೇಕ ॥

ಬಾಲ ನೀನಳಲದಿರೂ । ಸತ್ಕರುಣದಿ । ಪಾಲಿಪೆನಂಜದಿರೂ ॥ ಕಾಲನಿಂದಲಿ ಕಷ್ಟ ಕಾಲ ಬಂದ್ಹೊದಗುವ । ಗೋಳಿಲ್ಲ ಸುಖದೊಳಿರು । ಎನ್ನ ನಂಬಿರು ॥ ೧ ॥ ಸತ್ಯಾತ್ಮನೆಂದೆನಿಸಿ । ಸುಸ್ಥಿರ ಕೀರ್ತಿ । ಎತ್ತಿ ಬಾಳದು ಸಹಿಸಿ ॥ ಮಿತ್ರ ಚಂದ್ರರು ಪೆಸರಿತ್ತಿರುವನಕವು । ಯತ್ತೆನಾಯುವ ಹರಸಿ । ಸಂತೋಷವೆರಸಿ ॥ ೨ ॥

[2ನೇ ಕವರ್ ಪುಟಕ್ಕೆ ಮುಂದುವರಿದಿದೆ]

Edited, Printed & Published by K. V. Shenoy
at The Prabhat Printers, Ltd., Mangalore.